WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಬುಧವಾರ, ಮೇ ೨, ೨೦೧೨ (ವೈಶಾಖ ೧೨, ಶಕ ವರ್ಷ ೧೯೩೪) | ನಂ. ೩೨೨ |
|---|---|---|

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಐ 79 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ: 30.04.2012**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ 18, 1966) ಕಲಂ 3(1) 1(3) ಮತ್ತು 28(1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 191 ಎಸ್‌ಪಿಕ್ಯೂ 2006, ದಿನಾಂಕ: 02.08.2006 ಹಾಗೂ ಕೆ.ಐ.ಎ.ಡಿ. ಕಾಯ್ದೆ ಕಲಂ 28(4)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 79 ಎಸ್‌ಪಿಕ್ಯೂ 2007, ದಿನಾಂಕ: 21.07.2010ರಲ್ಲಿ ಪ್ರಕಟಗೊಂಡ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ, ಬೀರಗೊಂಡನಹಳ್ಳಿ ಗ್ರಾಮದ ಸರ್ವೆ ನಂ. 13 ಮತ್ತು 14ರ ಒಟ್ಟು 11 ಎಕರೆ 27 ಗುಂಟೆ (ವ್ಯವಸಾಯ ಮಾಡಿಕೊಂಡು, ವಾಸದ ಮನೆ, ದನದ ಕೊಟ್ಟಿಗೆ, 500 ಅಡಿಕೆ, 125 ತೆಂಗು, ಹಲಸು, ಹುಣಸೆ, ಮಾವು, ತೇಗ ಮರಗಳು, ಕಲ್ಲು ಕಟ್ಟಡ ಬಾವಿ, 2 ಕೊಳವೆ ಬಾವಿ, ಪಂಪ್‌ಹೌಸ್, ನೀರಾವರಿಯಿಂದ ಕೂಡಿದ ತೋಟ ಇರುವ ಕಾರಣ) ಜಮೀನಿಗೆ ಅನ್ವಯವಾಗುವಂತೆ ಹೊರಡಿಸಲಾದ ಅಧಿಸೂಚನೆಗಳನ್ನು 1897ರ ಜನರಲ್ ಕ್ಲಾಸಸ್ ಕಾಯ್ದೆಯ ಕಲಂ 21ರನ್ವಯ ವಿಹಿತವಾದ ಅಧಿಕಾರದ ಮೇರೆಗೆ ರದ್ದುಪಡಿಸಿ (Rescind), ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ವಿಶೇಷ ಪತ್ರಿಕೆ

| ಭಾಗ - V | ಬೆಂಗಳೂರು, ಗುರುವಾರ, ಮೇ ೩, ೨೦೧೨ (ವೈಶಾಖ ೧೩, ಶಕ ವರ್ಷ ೧೯೩೪) | ನಂ. ೩೨೩ |
|---|---|---|

## ಕರ್ನಾಟಕ ಲೋಕ ಸೇವಾ ಆಯೋಗ

ಕರ್ನಾಟಕ ಲೋಕ ಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ " ಬೆಂಗಳೂರು–560001

**ಅಧಿಸೂಚನೆ**

**ಸಂಖ್ಯೆ: ಪಿಎಸ್‌ಸಿ 28 ಆರ್‌ಟಿಬಿ 2011, ಬೆಂಗಳೂರು, ದಿನಾಂಕ: 26.04.2012**

ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ ಆರ್(2) 907/2011–12/ ಪಿಎಸ್‌ಸಿ, ದಿನಾಂಕ: 18–01–2012ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್ 'ಎ' ಕಿರಿಯ ಶ್ರೇಣಿಯ 20 ಜಿಲ್ಲಾ ಶಿಕ್ಷಣಾಧಿಕಾರಿಗಳ ಹುದ್ದೆಗಳ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಔಟಿ–ಟುಟಿಜ ಮೂಲಕ ಆಹ್ವಾನಿಸಿ ಅರ್ಜಿ ಸಲ್ಲಿಸಲು ದಿನಾಂಕ: 21–02–2012ರಂದು ಕೊನೆಯ ದಿನಾಂಕವನ್ನಾಗಿ ನಿಗದಿಪಡಿಸಲಾಗಿತ್ತು.

ಸದರಿ ಹುದ್ದೆಯ ಹೆಸರನ್ನು "ಜಿಲ್ಲಾ ಶಿಕ್ಷಣಾಧಿಕಾರಿಗಳು" ಎಂಬುದರ ಬದಲಿಗೆ "ಕ್ಷೇತ್ರ ಶಿಕ್ಷಣಾಧಿಕಾರಿಗಳು" ಎಂದು ಓದಿಕೊಳ್ಳಲು ದಿನಾಂಕ: 27.03.2012ರ ಸಂಖ್ಯೆ ಆರ್(1) 5824/2011-12/ಪಿಎಸ್‌ಸಿರಲ್ಲಿ ತಿದ್ದುಪಡಿ ಅಧಿಸೂಚನೆ ಹೊರಡಿಸಲಾಗಿತ್ತು.

ಅಧಿಸೂಚಿಸಿರುವ ಈ ಹುದ್ದೆಗಳು ತಾಂತ್ರಿಕ ಹುದ್ದೆಯೇ ಎಂಬ ಬಗ್ಗೆ ಕೆಲವು ಅಭ್ಯರ್ಥಿಗಳು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಶ್ನಿಸಿದ್ದು, ಸಾರ್ವಜನಿಕ ಶಿಕ್ಷಣ ಇಲಾಖೆಯು, ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಶೀಲಿಸಿ ಅವುಗಳ ಸಮಗ್ರ ತಿದ್ದುಪಡಿ ಅಂತಿಮಗೊಳಿಸಿದ ನಂತರ ಈ ಹುದ್ದೆಗಳ ನೇಮಕಾತಿಯನ್ನು ಕೈಗೊಳ್ಳಲಿರುವುದಾಗಿ ತಿಳಿಸಿ, ಪ್ರಸ್ತಾವನೆಯನ್ನು ಹಿಂದಕ್ಕೆ ಪಡೆದಿರುವುದರಿಂದ 20 ಕ್ಷೇತ್ರ ಶಿಕ್ಷಣಾಧಿಕಾರಿ ಹುದ್ದೆಗಳ ನೇಮಕಾತಿ ಪ್ರಕ್ರಿಯೆಯನ್ನು ಆಯೋಗವು ಈ ಮೂಲಕ ರದ್ದುಪಡಿಸಿದೆ.

**ವಿ.ಬಿ. ಪಾಟೀಲ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ

# ವಿಶೇಷ ಪತ್ರಿಕೆ

| ಭಾಗ - **IV-A** | ಬೆಂಗಳೂರು, ಗುರುವಾರ, ಮೇ ೩, ೨೦೧೨ (ವೈಶಾಖ ೧೩, ಶಕ ವರ್ಷ ೧೯೩೪) | ನಂ. ೩೨೬ |
|---|---|---|

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 31 ಶಾಸನ 2012, ಬೆಂಗಳೂರು, ದಿನಾಂಕ: 3.5.2012**

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2012 – ಇದಕ್ಕೆ 2012ರ ಏಪ್ರಿಲ್ ತಿಂಗಳ ಇಪ್ಪತ್ತೆಂಟನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2012ರ ಕರ್ನಾಟಕ ಅಧಿನಿಯಮ ಸಂಖ್ಯೆ:23 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2012 ರ ಕರ್ನಾಟಕ ಅಧಿನಿಯಮ ಸಂಖ್ಯೆ: 23**

(2012ರ ಮೇ ಮಾಹೆಯ ಮೂರನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2012

(2012ರ ಏಪ್ರಿಲ್ ಮಾಹೆಯ ಇಪ್ಪತ್ತೆಂಟನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲು ಪ್ರಸ್ತಾವಿಸಲಾದ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು – ವಿರುದ್ಧ – ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಮತ್ತು ರಾಜ್ಯ ಸರ್ಕಾರವು, ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ 2006-07, 2007-08, 2008-09, 2009-10, 2010-11 ಮತ್ತು 2011-12 ವರ್ಷಗಳಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವುದರಿಂದ ಮತ್ತು 2012-13ನೇ ವರ್ಷದಲ್ಲಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಳ್ಳಲು ಉದ್ದೇಶಿಸಿರುವುದರಿಂದ ಮತ್ತು 2012-13ನೇ ಶೈಕ್ಷಣಿಕ ವರ್ಷದಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಶುಲ್ಕ ನಿಗದಿಗಾಗಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು (2006ರ ಕರ್ನಾಟಕ ಅಧಿನಿಯಮ 8) ತಡೆಹಿಡಿಯಬೇಕೆಂದು ಅಭಿಪ್ರಾಯ ಪಟ್ಟಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.**- (1) ಈ ಅಧಿನಿಯಮವನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006 ರಲ್ಲಿ (2006ರ ಕರ್ನಾಟಕ ಅಧಿನಿಯಮ 8) ಏನೇ ಒಳಗೊಂಡಿದ್ದರೂ 2012–13ನೇ ಶೈಕ್ಷಣಿಕ ವರ್ಷಕ್ಕಾಗಿ ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಗಳು ಮತ್ತು ಶುಲ್ಕ ನಿಗದಿ ಈ ಅಧಿನಿಯಮದ ಉಪಬಂಧಗಳ ಅನುಸಾರವಾಗಿ ನಡೆಯತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಅನ್ಯಥಾ ಅಗತ್ಯವಿದ್ದ ಹೊರತು,–

(ಎ) "ಸಾಮಾನ್ಯ ಪ್ರವೇಶ ಪರೀಕ್ಷೆ" ಎಂದರೆ, ಏಕಗವಾಕ್ಷಿ ಪ್ರಕ್ರಿಯೆಯ ಮೂಲಕ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡುವ ಉದ್ದೇಶಕ್ಕಾಗಿ ಅಭ್ಯರ್ಥಿಗಳ ಅರ್ಹತೆ (ಮೆರಿಟ್) ಯನ್ನು ನಿರ್ಧರಿಸುವುದಕ್ಕಾಗಿ ನಡೆಸಲಾಗುವ ಪರೀಕ್ಷೆ ಮತ್ತು ತರುವಾಯದ ಕೇಂದ್ರೀಯ ಕೌನ್ಸೆಲಿಂಗ್ ವ್ಯವಸ್ಥೆ;

(ಬಿ) "ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ" ಎಂದರೆ, ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸುವ ರಾಜ್ಯ ಸರ್ಕಾರದ ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಏಜೆನ್ಸಿ;

(ಸಿ) "ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ" ಎಂದರೆ, ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಮತ್ತು ಶುಲ್ಕನಿಗದಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಮತ್ತು ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ತಮ್ಮ ನಡುವೆ ಮಾಡಿಕೊಳ್ಳಬಹುದಾದ ಯಾವುದೇ ಒಪ್ಪಂದ;

(ಡಿ) "ಸಂಸ್ಥೆ" ಎಂದರೆ, ವೃತ್ತಿ ಶಿಕ್ಷಣ ಕೋರ್ಸ್‌ಗಳ ವಿದ್ಯಾಭ್ಯಾಸ ನೀಡುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳು;

(ಇ) "ಏಕ ಸದಸ್ಯ ನಿಯಂತ್ರಕ ಸಮಿತಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ರಚಿಸಿದ ಸಮಿತಿ;

(ಎಫ್) "ವೃತ್ತಿ ಶಿಕ್ಷಣ ಕೋರ್ಸುಗಳು" ಎಂದರೆ,–

(I) ವೈದ್ಯಕೀಯ ಮತ್ತು ದಂತ ವೈದ್ಯ ಶಿಕ್ಷಣ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಮೆಡಿಸಿನ್ ಮತ್ತು ಬ್ಯಾಚುಲರ್ ಆಫ್ ಸರ್ಜರಿ; ಮತ್ತು

(ಬಿ) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ

(II) ಇಂಜಿನಿಯರ್ ಸಂಸ್ಥೆಗಳಲ್ಲಿ,

(ಎ) ಬ್ಯಾಚುಲರ್ ಆಫ್ ಇಂಜಿನಿಯರಿಂಗ್;

(ಬಿ) ಬ್ಯಾಚುಲರ್ ಆಫ್ ಟೆಕ್ನಾಲಜಿ

(ಸಿ) ಬ್ಯಾಚುಲರ್ ಆಫ್ ಆರ್ಕಿಟೆಕ್ಚರ್;

(III) ವೈದ್ಯಕೀಯ ಮತ್ತು ದಂತ ವಿಜ್ಞಾನಗಳ ಸ್ನಾತಕೋತ್ತರ ಪದವಿ ಮತ್ತು ಡಿಪ್ಲೊಮೊ ಕೋರ್ಸುಗಳು;

(IV) ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಇತರ ಕೋರ್ಸುಗಳು.

(ಜಿ) "ಅನುದಾನಿತವಲ್ಲದ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರದಿಂದ ಯಾವುದೇ ಅನುದಾನವನ್ನು ಅಥವಾ ಸಹಾಯಾನುದಾನವನ್ನು ಸ್ವೀಕರಿಸದ ಯಾವುದೇ ಖಾಸಗಿ ಆಡಳಿತವುಳ್ಳ ವೃತ್ತಿ ಶಿಕ್ಷಣ ಸಂಸ್ಥೆ.

**3. ಏಕ ಸದಸ್ಯ ನಿಯಂತ್ರಕ ಸಮಿತಿಯ ರಚನೆ.–** ರಾಜ್ಯದ ಯಾವುದೇ ವಿಶ್ವವಿದ್ಯಾಲಯದ ಮಾಜಿ ಕುಲಪತಿಯವರು ಸದಸ್ಯರಾಗಿರುವ, ರಾಜ್ಯ ಸರ್ಕಾರವು ನೇಮಿಸಿದ ಒಂದು ಏಕ ಸದಸ್ಯ ನಿಯಂತ್ರಕ ಸಮಿತಿಯು ಇರತಕ್ಕದ್ದು. ಸದರಿ ಏಕಸದಸ್ಯ ನಿಯಂತ್ರಕ ಸಮಿತಿಯು, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಮಾಡಿಕೊಂಡ ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶದ ಮತ್ತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**4. ಶುಲ್ಕದ ನಿಗದಿ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಬಂಧದಲ್ಲಿ ನಿಗದಿಪಡಿಸಿದ ಶುಲ್ಕ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದ ಅನುಸಾರವಾಗಿ, ಅಧಿಸೂಚನೆಯ ಮೂಲಕ, ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕೆ ಸಂದಾಯಮಾಡಬೇಕಾದ ಶುಲ್ಕವನ್ನು ನಿಗದಿಗೊಳಿಸಬಹುದು. ಬೇರೆ ಬೇರೆ ಪ್ರವರ್ಗದ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಶುಲ್ಕದ ದರವನ್ನು ನಿಗದಿಗೊಳಿಸಬಹುದು.

**5. ಪ್ರವೇಶ ನಿಯಂತ್ರಣ ಮತ್ತು ಸೀಟು ಹಂಚಿಕೆ ಪ್ರಮಾಣ.–** ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ, ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಸೀಟುಗಳನ್ನು ಈ ಮುಂದಿನ ರೀತಿಯಲ್ಲಿ ಭರ್ತಿ ಮಾಡತಕ್ಕದ್ದು, ಎಂದರೆ:–

(i) 2012–13ನೇ ವರ್ಷಕ್ಕೆ, ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಡಿಯಲ್ಲಿ ಒಪ್ಪಬಹುದಾದಂಥ ಸಂಖ್ಯೆಯ ಸೀಟುಗಳನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರಿ ಸೀಟುಗಳಿಗೆ ಪ್ರವೇಶಕ್ಕಾಗಿ ವಿದ್ಯಾರ್ಥಿಗಳ ಆಯ್ಕೆ ನಿಯಮಗಳು, 2006ಕ್ಕೆ ಅನುಸಾರವಾಗಿ ಸರ್ಕಾರಿ ಸಾಮಾನ್ಯ ಪ್ರವೇಶ ಪರೀಕ್ಷೆ ಘಟಕದ ಮೂಲಕ ತುಂಬತಕ್ಕದ್ದು.

(ii) ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ ಹೊರತು, ಉಳಿದ ಸೀಟುಗಳನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ನಿರ್ಧರಿಸಲಾದ ಅರ್ಹತೆಯ ಆಧಾರದ ಮೇಲೆ ನ್ಯಾಯಯುತ ಹಾಗೂ ಪಾರದರ್ಶಕ ರೀತಿಯಲ್ಲಿ ಸಂದರ್ಭಾನುಸಾರ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ಅಥವಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಸಂಸ್ಥೆಗಳ ಸಂಘ ನಡೆಸಿದ ಸಾಮಾನ್ಯ ಪ್ರವೇಶ ಪರೀಕ್ಷೆ ಹಾಗೂ ತರುವಾಯ ನಡೆಸಲಾಗುವ ಕೇಂದ್ರೀಯ ಕೌನ್ಸಿಲಿಂಗ್ ಮೂಲಕ ತುಂಬತಕ್ಕದ್ದು.

(2) ರಾಜ್ಯ ಸರ್ಕಾರದ ಮೀಸಲಾತಿ ನೀತಿ ಮತ್ತು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು ವಿವಿಧ ಪ್ರವರ್ಗದ ಸಂಸ್ಥೆಗಳ ಸಂಬಂಧದಲ್ಲಿ ವಿವಿಧ ಪ್ರವರ್ಗದ ವಿದ್ಯಾರ್ಥಿಗಳನ್ನು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದವರು ಹಾಗೂ ಆಡಳಿತ ಮಂಡಳಿಯವರು ತುಂಬಬೇಕಾದ ಸೀಟುಗಳ ಹಂಚಿಕೆ ಪ್ರಮಾಣವನ್ನು ಅಧಿಸೂಚನೆಯ ಮೂಲಕ ಪ್ರಕಟಿಸಬಹುದು.

**6. ಈ ಅಧಿನಿಯಮವನ್ನು ಉಲ್ಲಂಘಿಸಿ ಮಾಡಿದ ಪ್ರವೇಶಗಳು ಅಸಿಂಧುವಾಗಿರುವುದು.–** ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದವನ್ನು ಉಲ್ಲಂಘಿಸಿ ಯಾವುವೇ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು 2012–13ನೇ ಶೈಕ್ಷಣಿಕ ವರ್ಷಕ್ಕಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಥವಾ ತರುವಾಯ ಮಾಡಿದ ಎಲ್ಲ ಪ್ರವೇಶಗಳು ಅಸಿಂಧುವಾಗಿರತಕ್ಕದ್ದು. ಅಂಥ ಉಲ್ಲಂಘನೆಯ ಸಂಬಂಧದಲ್ಲಿ ರಾಜ್ಯ ಸರ್ಕಾರವು ಅಂಥ ಪ್ರವೇಶಗಳನ್ನು ಅಥವಾ ಸಂದರ್ಭಾನುಸಾರ ಅಂಥ ಸಂಸ್ಥೆಯ ಸಂಯೋಜನೆಯನ್ನು ರದ್ದುಪಡಿಸುವುದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

**7. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**8. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಮೇ ೩, ೨೦೧೨ (ವೈಶಾಖ ೧೩, ಶಕ ವರ್ಷ ೧೯೩೪) | ನಂ. ೩೨೨ |
|---|---|---|


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಗ್ರಾಅಪ 38 ಪಬವ 2012, ಬೆಂಗಳೂರು, ದಿನಾಂಕ: 3.5.2012

ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂ.14)ರ ಕಲಂ 3ರ ಉಪ ಕಲಂ (1) ಸಹವಾಚನ ಕಲಂ 8ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ (ಎ)ರಲ್ಲಿ ಅಗತ್ಯಪಡಿಸಲಾದಂತೆ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) (ವೃಂದ ಮತ್ತು ನೇಮಕಾತಿ) ನಿಯಮಗಳು, 2008ಕ್ಕೆ ತಿದ್ದುಪಡಿ ತರಲು ಈ ಕೆಳಕಂಡ ನಿಯಮಗಳ ಕರಡನ್ನು ಅಧಿಸೂಚನೆ ಸಂಖ್ಯೆ: ಗ್ರಾಅಪ 38 ಪಬವ 2012, ದಿನಾಂಕ: 9–4–2012ರ ಮೂಲಕ ಹೊರಡಿಸಿ ನಂತರ ದಿನಾಂಕ: 9–4–2012ರ ವಿಶೇಷ ಕರ್ನಾಟಕ ರಾಜ್ಯಪತ್ರದ ಭಾಗ–IV-A ರಲ್ಲಿ ಪ್ರಕಟಿಸಿ, ಸದರಿ ನಿಯಮಗಳಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಪ್ರಕಟಣೆಯ ದಿನಾಂಕದಿಂದ 15 ದಿನಗಳ ಒಳಾಗಿ ಸಲ್ಲಿಸಲು ಆಹ್ವಾನಿಸಲಾಗಿದ್ದರಿಂದ,

ಸದರಿ ಕರಡನ್ನು ದಿನಾಂಕ: 9–4–2012ರದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದರಿಂದ,

ಮತ್ತು ಈ ಸಂಬಂಧ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದಲ್ಲಿ ಸ್ವೀಕೃತವಾಗಿಲ್ಲದಿರುವುದರಿಂದ,

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ.14) ರ ಕಲಂ 3ರ ಅಡಿಯ ಉಪ ಕಲಂ (1) ಸಹವಾಚನ ಕಲಂ 8 ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಏನೆಂದರೆ:–

### ನಿಯಮಗಳು

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) (ವೃಂದ ಮತ್ತು ನೇಮಕಾತಿ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯುವುದು.

(2) ಈ ನಿಯಮಗಳು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಅನುಸೂಚಿಗೆ ತಿದ್ದುಪಡಿ:–** ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಹಾಗೂ ಸ್ಥಳೀಯ ಆಡಳಿತ ಶಾಖೆ) ವೃಂದ ಮತ್ತು ನೇಮಕಾತಿ ನಿಯಮಗಳು 2008ರ ಅನುಸೂಚಿಯಲ್ಲಿ ಕ್ರಮ ಸಂಖ್ಯೆ: 4ರಲ್ಲಿನ ಅಂಕಣ (5) – ಉಪ ಕಾರ್ಯದರ್ಶಿ, ಪಂಚಾಯತ್ ರಾಜ್(ಹಿರಿಯ ಶ್ರೇಣಿ) ವರ್ಗದ ಹುದ್ದೆಗಳಿಗೆ ಸಂಬಂಧಿಸಿದ ನಮೂದುಗಳಲ್ಲಿ–

"ಈ ನಿಯಮಗಳು ಜಾರಿಗೆ ಬಂದ ಒಂದು ವರ್ಷದೊಳಗಾಗಿ ಮೂರು ವರ್ಷಗಳ ಸೇವೆಯನ್ನು ಪೂರ್ಣಗೊಳಿಸದ ವ್ಯಕ್ತಿಗಳು ಲಭ್ಯವಾಗದಿದ್ದಲ್ಲಿ ಕನಿಷ್ಠ ಒಂದು ವರ್ಷಕ್ಕಿಂತ ಕಡಿಮೆ ಇಲ್ಲದ ಸೇವಾವಧಿಯನ್ನು ಪೂರ್ಣಗೊಳಿಸಿದ ವ್ಯಕ್ತಿಗಳನ್ನು ಪರಿಗಣಿಸಬಹುದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

## RURAL DEVELOPMENT AND PANCHAYAT RAJ SECRETARIAT

### NOTIFICATION

### No. RDP 38 PBV 2012, Bangalore, Dated: 3.5.2012

Whereas the draft of the following rules further to amend the Karnataka General Service (Development Branch and Local Government Branch) (Cadre and Recruitment) Rules, 2008, was issued as required by clause (a) of sub-section (2) of Section 3 read with section 8 of the Karnataka State Civil Services Act, 1978 (Karnataka Act 14 of 1990) in Notification No: RDP 38 PBV 2012, dated: 9-4-2012 and thereafter published in Part-IV-A of the Karnataka Gazette Extraordinary dated 9-4-2012 inviting objections and suggestions from persons likely to be affected thereby within 15 days from the date of publication of the draft in the Official Gazette.

Whereas the said draft was made available to the public on 9-4-2012.

And whereas no objections and suggestions have been received in this behalf by the State Government.

Now, therefore, in exercise of the powers conferred by sub-section (1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely:-

**RULES**

**1. Title and Commencement**:- (1) These rules may be called as the Karnataka General Service (Development Branch and Local Government Branch) (Cadre and Recruitment) (Amendment) Rules, 2012.

(2) They shall come into force from the date of their publication in the Official Gazette.

**2. Amendment of the Schedule.-** In the Karnataka General Service(Development Branch and Local Government Branch(Cadre and Recruitment) Rules, 2008, in the schedule, in the entries relating to the category of the posts of Deputy Secretary, Panchayat Raj (Senior Scale)at Serial No. 4, in Column (5) the following proviso shall be inserted at the end, namely.-

"Provided that for a period of one year from date of the commencement of the Karnataka General Services (Development Branch and Local Government Branch(Cadre and Recruitment) (Amendment) Rules, 2012, if no suitable person who has put in not less than three years of service is available, a person who has put in not less than one year of service may be considered" .

By order and in the name of the Governor of Karnataka,

**H.B.RAGHUNATH**
Under Secretary to Government,
Rural Development and Panchayat Raj Department

# ವಿಶೇಷ ಪತ್ರಿಕೆ

| ಭಾಗ - V | ಬೆಂಗಳೂರು, ಶುಕ್ರವಾರ, ಮೇ ೪, ೨೦೧೨ (ವೈಶಾಖ ೧೪, ಶಕ ವರ್ಷ ೧೯೩೪) | ನಂ. ೩೩೦ |
|---|---|---|

## ಸಾರ್ವಜನಿಕ ಶಿಕ್ಷಣ ಇಲಾಖೆ

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಇ1(3) ಆದರ್ಶ/ಪ್ರೌಶಾಶಿನೇ 01/2012–13, ಬೆಂಗಳೂರು, ದಿನಾಂಕ: 3ನೇ ಮೇ, 2012**

2012–13ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, **ಬೆಳಗಾವಿ ವಿಭಾಗ**, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಸರ್ಕಾರಿ ಪ್ರೌಢ ಶಾಲೆಗಳು, ಆದರ್ಶ ವಿದ್ಯಾಲಯಗಳು ಮತ್ತು ಆರ್.ಎಂ.ಎಸ್.ಎ ಅಡಿಯಲ್ಲಿ ಉನ್ನತೀಕರಿಸಲಾದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಪ್ರೌಢಶಾಲಾ ಸಹಾಯಕ ಶಿಕ್ಷಕರು ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ವೃಂದದ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಶಿಕ್ಷಕರನ್ನು ಆಯ್ಕೆ ಮಾಡುವ ಸಂಬಂಧದಲ್ಲಿ **ಸಂಖ್ಯೆ: ಇ1(3) ಆದರ್ಶ/ಪ್ರೌಶಾಶಿನೇ 01/2012–13, ದಿನಾಂಕ: 02ನೇ ಏಪ್ರಿಲ್ 2012** (ಕರ್ನಾಟಕ ರಾಜ್ಯ, ವಿಶೇಷ ರಾಜ್ಯ ಪತ್ರ ಭಾಗ–V, ನಂ. 261) ರ ರೀತ್ಯಾ ಹೊರಡಿಸಲಾಗಿದ್ದುದು ಸರಿಯಷ್ಟೆ. ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| **ದಿನಾಂಕ: 02/04/2012 ರಂದು ಹೊರಡಿಸಿದ ವಿಷಯ, ಪುಟ ಸಂಖ್ಯೆ: 10** | **ತಿದ್ದುಪಡಿಯಾಗಿರುವ ವಿಷಯ, ಪುಟ ಸಂಖ್ಯೆ: 10** |
|---|---|
| ಪುಟಸಂಖ್ಯೆ 10 ಕಂಡಿಕೆ 4ರಲ್ಲಿ ಪರೀಕ್ಷೆಯ ಅವಧಿ ಮತ್ತು ಸಮಯಕ್ಕೆ ಸಂಬಂಧಿಸಿದಂತೆ ಸಂಸ್ಕೃತ/ಉರ್ದು/ತಮಿಳು ಪತ್ರಿಕೆ – 2 | ಪುಟಸಂಖ್ಯೆ 10 ಕಂಡಿಕೆ 4ರಲ್ಲಿ ಪರೀಕ್ಷೆಯ ಅವಧಿ ಮತ್ತು ಸಮಯಕ್ಕೆ ಸಂಬಂಧಿಸಿದಂತೆ ಸಂಸ್ಕೃತ/ಉರ್ದು/ಮರಾಠಿ ಪತ್ರಿಕೆ – 2 ಎಂದು ಓದಿಕೊಳ್ಳುವುದು. |

| ದಿನಾಂಕ: 02/04/2012 ರಂದು ಹೊರಡಿಸಿದ ವಿಷಯ, ಪುಟ ಸಂಖ್ಯೆ: 10 | ತಿದ್ದುಪಡಿಯಾಗಿರುವ ವಿಷಯ, ಪುಟ ಸಂಖ್ಯೆ: 10 |
|---|---|
| ಪುಟಸಂಖ್ಯೆ 10 ಕಂಡಿಕೆ 6ರ ಕ್ರಮಸಂಖ್ಯೆ 3ರಲ್ಲಿ ಭಾಷಾ ಶಿಕ್ಷಕರ ಹುದ್ದೆಗಳಿಗೆ: ಕನ್ನಡ/ಇಂಗ್ಲಿಷ್/ಹಿಂದಿ/ಸಂಸ್ಕೃತ/ ಉರ್ದು | ಪುಟಸಂಖ್ಯೆ 10 ಕಂಡಿಕೆ 6ರ ಕ್ರಮಸಂಖ್ಯೆ 3ರಲ್ಲಿ ಭಾಷಾ ಶಿಕ್ಷಕರ ಹುದ್ದೆಗಳಿಗೆ: ಕನ್ನಡ/ಇಂಗ್ಲಿಷ್/ಹಿಂದಿ/ಸಂಸ್ಕೃತ/ ಉರ್ದು/ಮರಾಠಿ ಎಂದು ಓದಿಕೊಳ್ಳುವುದು. |

**ಆರ್.ಟಿ. ದೇಸಾಯಿ**
ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ

# ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಸೋಮವಾರ, ಮೇ ೭, ೨೦೧೨ (ವೈಶಾಖ ೧೭, ಶಕ ವರ್ಷ ೧೯೩೪) | ನಂ. ೩೩೧ |
|---|---|---|

## ಆಯುಕ್ತರ ಕಾರ್ಯಾಲಯ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

**ನಮೂನೆ – 6**

**(ನಿಯಮ –32 –ಎ)**

**ಸಂಖ್ಯೆ : ಬೆಂಅಪ್ರಾ/ನಯೋಸ/ಎಂ.ಐ.ಎಸ್.–1752/10–11/MIS–434/743/2012–13, ಬೆಂಗಳೂರು, ದಿನಾಂಕ: 07.05.2012**

**ಆರ್.ಎಂ.ಪಿ. – 2015 ಅನ್ನು ಪರಿಷ್ಕರಿಸಲು ತಯಾರಿಸುವ ಇಚ್ಚೆಯನ್ನು ಘೋಷಿಸುವ ಬಗ್ಗೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 10 ರಡಿಯಲ್ಲಿ ಬೆಂಗಳೂರು ಮಹಾನಗರ ಪ್ರದೇಶಕ್ಕೆ (ಬೆಂಗಳೂರು ಸ್ಥಳೀಯ ಯೋಜನಾ ಪ್ರದೇಶ) ಆರ್.ಎಂ.ಪಿ. – 2015 ಅನ್ನು ಪರಿಷ್ಕರಿಸಿ ತಯಾರಿಸುವ ಇಚ್ಚೆಯನ್ನು ಘೋಷಿಸಲಾಗಿದೆ.

ಸಾರ್ವಜನಿಕರಿಂದ ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಸಲಹೆಗಳನ್ನು ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಎರಡು ತಿಂಗಳೊಳಗಾಗಿ ಖುದ್ದಾಗಿ ಅಥವಾ ನೋಂದಣಿ ಅಂಚೆ ಮೂಲಕ ನಗರ ಯೋಜನಾ ವಿಭಾಗ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಚೌಡಯ್ಯ ರಸ್ತೆ, ಕುಮಾರಪಾರ್ಕ್ ಪಶ್ಚಿಮ, ಬೆಂಗಳೂರು – 560020 ಇವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

**ಆಯುಕ್ತರು**
**ಬೆಂಅಪ್ರಾ, ಬೆಂಗಳೂರು**

## OFFICE OF THE COMMISSIONER, BANGALORE DEVELOPMENT AUTHORITY, BANGALORE

**Form - VI**

**(Rule 32-A)**

**No. BDA/TPM/MIS-1752/10-11/MIS-434/743/2012-13, Bangalore, Date: 07.05.2012**

**Declaration of intention of making Revision of RMP-2015**

It is here by notified for the information of the general public that under section 10 of the Karnataka Town and Country Planning Act, 1961 the Bangalore Development Authority, intends to prepare the Revision of RMP-2015 Plan for Bangalore Metropolitan Area (Local Planning Area of Bangalore).

Suggestions from the public will be received in the Office of the Town Planning Section of Bangalore Development Authority, T.Chowdaiah Road, Kumarapark west, Bangalore-560020. for a period of two months, from the date of Publication, either in person or by Registered post.

**COMMISSIONER**
BDA, Bangalore

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮೇ ೭, ೨೦೧೨ (ವೈಶಾಖ ೧೭, ಶಕ ವರ್ಷ ೧೯೩೪) | ನಂ. ೩೩೫ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 13 ಇಕಾಅ 2012, ಬೆಂಗಳೂರು, ದಿನಾಂಕ: 05–05–2012**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ (ಕರ್ನಾಟಕ ಅಧಿನಿಯಮ 01, 2012) ಸೆಕ್ಷನ್ 4ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಅನುಸೂಚಿಯನ್ನು ಕೆಳಗಿನಂತೆ ತಿದ್ದುಪಡಿ ಮಾಡಿದೆ. ಯಾವುವೆಂದರೆ:

ಸದರಿ ಅಧಿನಿಯಮದ ಅನುಸೂಚಿಯಲ್ಲಿ

**I - ಶೀರ್ಷಿಕೆ 1 –"ನಗರಾಭಿವೃದ್ಧಿ ಇಲಾಖೆ"** ಯಲ್ಲಿನ (i) ಉಪ ಶೀರ್ಷಿಕೆ "III ಸ್ಥಳೀಯ ಪ್ರಾಧಿಕಾರ/ಸಾರ್ವಜನಿಕ ಪ್ರಾಧಿಕಾರ: ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ ಪೌರನಿಗಮಗಳು" ಇದರಲ್ಲಿನ ನಮೂದುಗಳ ಬದಲಾಗಿ ಕೆಳಗಿನಂತೆ ಓದಿಕೊಳ್ಳತಕ್ಕದ್ದು:

| ಕ್ರ. ಸಂ | ಸೇವೆಗಳ ಪಟ್ಟಿ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತುಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1. | 2 | 3 | 4 | 5 | 6 | 7 | 8 |
| 1. | ಜನನ, ಮರಣ ಮತ್ತು ಸತ್ತು ಹುಟ್ಟಿದ ಮಗುವಿನ ಪ್ರಮಾಣ ಪತ್ರಗಳನ್ನು ವಿತರಿಸುವುದು | ವಲಯ ಸಹಾಯಕ ಆಯುಕ್ತರು/ ವೈದ್ಯಾಧಿಕಾರಿ/ ಪರಿಸರ ಅಭಿಯಂತರರು/ ಆರೋಗ್ಯ ನಿರೀಕ್ಷಕರು/ ಸಹಾಯಕ ಆರೋಗ್ಯ ಅಧಿಕಾರಿ | ವಿದ್ಯುನ್ಮಾನ ಮಾಧ್ಯಮದಲ್ಲಿ ಲಭ್ಯವಿರುವ ಘಟನಾ ವಿವರಗಳಿಗಾಗಿ 3 ಕೆಲಸದ ದಿನಗಳು | ಆರೋಗ್ಯ ಅಧಿಕಾರಿ /ಉಪ ಆಯುಕ್ತರು | 15 ಕೆಲಸದ ದಿನಗಳು | ಆಯುಕ್ತರು | 30 ಕೆಲಸದ ದಿನಗಳು |
| | | | ವಿದ್ಯುನ್ಮಾನ ಮಾಧ್ಯಮದಲ್ಲಿ ಲಭ್ಯವಿರದಂಥ ಘಟನಾ ವಿವರಗಳಿಗಾಗಿ 7 ಕೆಲಸದ ದಿನಗಳು | ಆರೋಗ್ಯ ಅಧಿಕಾರಿ /ಉಪ ಆಯುಕ್ತರು | 15 ಕೆಲಸದ ದಿನಗಳು | ಆಯುಕ್ತರು | 30 ಕೆಲಸದ ದಿನಗಳು |
| 2. | ಅಧಿಕಾರಿಗಳ ಪ್ರತ್ಯಾಯೋಜನೆಯ ಪ್ರಕಾರ ವಾಣಿಜ್ಯ ಲೈಸೆನ್ಸ್ ಅನ್ನು ನೀಡುವುದು | ವಲಯ ಸಹಾಯಕ ಆಯುಕ್ತರು/ ವೈದ್ಯಾಧಿಕಾರಿ/ ಪರಿಸರ ಅಭಿಯಂತರರು/ ಆರೋಗ್ಯ ನಿರೀಕ್ಷಕರು/ ಸಹಾಯಕ ಆರೋಗ್ಯ ಅಧಿಕಾರಿ | 30 ಕೆಲಸದ ದಿನಗಳು | ಆರೋಗ್ಯ ಅಧಿಕಾರಿ/ ಉಪ ಆಯುಕ್ತರು | 15 ಕೆಲಸದ ದಿನಗಳು | ಆಯುಕ್ತರು | 30 ಕೆಲಸದ ದಿನಗಳು |
| 3. | ಖಾತಾ ಉದ್ಧೃತ | ವಲಯ ಸಹಾಯಕ ಆಯುಕ್ತರು/ಉಪ ಕಂದಾಯ ಅಧಿಕಾರಿ/ಕಂದಾಯ ನಿರೀಕ್ಷಕರು | ವಿದ್ಯುನ್ಮಾನ ಮಾಧ್ಯಮದಲ್ಲಿ ಲಭ್ಯವಿರುವ ಘಟನಾ ವಿವರಗಳಿಗಾಗಿ 3 ಕೆಲಸದ ದಿನಗಳು | ಕಂದಾಯ ಅಧಿಕಾರಿ/ ಉಪ ಆಯುಕ್ತರು | 7 ಕೆಲಸದ ದಿನಗಳು | ಆಯುಕ್ತರು | 30 ಕೆಲಸದ ದಿನಗಳು |

| ಕ್ರ. ಸಂ | ಸೇವೆಗಳ ಪಟ್ಟಿ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತುಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1. | 2 | 3 | 4 | 5 | 6 | 7 | 8 |
| | | | ವಿದ್ಯುನ್ಮಾನ ಮಾಧ್ಯಮದಲ್ಲಿ ಲಭ್ಯವಿರದಂಥ ಘಟನಾ ವಿವರಗಳಿಗಾಗಿ 7 ಕೆಲಸದ ದಿನಗಳು | ಕಂದಾಯ ಅಧಿಕಾರಿ | 7 ಕೆಲಸದ ದಿನಗಳು | ಆಯುಕ್ತರು | 30 ಕೆಲಸದ ದಿನಗಳು |
| 4. | ಏಕವಾಸ ಘಟಕದ 2400 ಚ.ಅಡಿ ಅಳತೆಯ ನಿವಾಸದ ಹೊಸ ಕಟ್ಟಡದ ಲೈಸೆನ್ಸ್ | ನಗರ ಯೋಜನಾ ನಿರ್ದೇಶಕರು/ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್/ ಸಹಾಯಕ ಇಂಜಿನಿಯರ್ | 30 ಕೆಲಸದ ದಿನಗಳು | ನಗರ ಯೋಜನೆಯ ಜಂಟಿ/ ಉಪ ನಿರ್ದೇಶಕರು/ ಕಾರ್ಯಪಾಲಕ ಇಂಜಿನಿಯರ್/ ಸಿಟಿ ಇಂಜಿನಿಯರ್/ ಉಪ ಆಯುಕ್ತರು | 15 ಕೆಲಸದ ದಿನಗಳು | ಆಯುಕ್ತರು | 30 ಕೆಲಸದ ದಿನಗಳು |
| 5. | ನಿವಾಸದ ಕಟ್ಟಡಗಳಿಗಾಗಿ ಸೇವಾ ವಲಯದಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಹೊಸ ಸಂಪರ್ಕವನ್ನು ಕಲ್ಪಿಸುವುದಕ್ಕೆ ಅನುಮತಿ | ಸಹಾಯಕ ಇಂಜಿನಿಯರ್/ ಕಿರಿಯ ಇಂಜಿನಿಯರ್ | 15 ಕೆಲಸದ ದಿನಗಳು | ಸಹಾಯಕ ಕಾರ್ಯಪಾಲಕ ಇಂಜಿನಿಯರ್ /ಸಿಟಿ ಇಂಜಿನಿಯರ್ | 15 ಕೆಲಸದ ದಿನಗಳು | ಕಾರ್ಯಪಾಲಕ ಇಂಜಿನಿಯರ್ | 30 ಕೆಲಸದ ದಿನಗಳು |

**II- ಶೀರ್ಷಿಕೆ 5 "ಒಳಾಡಳಿತ ಇಲಾಖೆ"** ಯಲ್ಲಿನ

(ಅ) ಕ್ರಮ ಸಂಖ್ಯೆ 6 ಮತ್ತು ಕ್ರಮ ಸಂಖ್ಯೆ 7 ರ ಬದಲಾಗಿ ಕೆಳಗಿನಂತೆ ಓದಿಕೊಳ್ಳತಕ್ಕದ್ದು:

| ಕ್ರಮ ಸಂ | ಸೇವಾ ವಿವರ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತು ಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೇ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 6. | ಅರ್ಜಿಗಳ ವಿಲೇವಾರಿ (ದೂರುಗಳ ವಿಲೇವಾರಿ) | ಎಸ್.ಹೆಚ್.ಓ | 15 ದಿನಗಳು | ಸಿ.ಪಿ.ಐ/ ಎಸ್.ಡಿ.ಪಿ.ಓ | 7 ದಿನಗಳು | ಎಸ್.ಡಿ.ಪಿ.ಓ/ಅಡಿಷನಲ್ ಎಸ್.ಪಿ/ಡಿ.ಸಿ.ಪಿ | 7 ದಿನಗಳು |

(ಆ) ಕ್ರಮ ಸಂಖ್ಯೆ 8, 9, 10, 11, 12, 13ನ್ನು ಅನುಕ್ರಮವಾಗಿ ಕ್ರಮಸಂಖ್ಯೆ 7, 8, 9, 10, 11, ಮತ್ತು 12 ಎಂದು ಓದಿಕೊಳ್ಳತಕ್ಕದ್ದು.

(ಇ) ಕ್ರಮ ಸಂಖ್ಯೆ 12ರ ನಂತರ ಕ್ರಮ ಸಂಖ್ಯೆ 13 ರಿಂದ 19ರವರೆಗೆ ಕೆಳಕಂಡ 07 ಹೊಸ ಸೇವೆಗಳನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ | ಸೇವಾ ವಿವರ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತು ಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 13. | ಅ) ಯು.ಎಸ್. ರಾಷ್ಟ್ರೀಯರು ಭಾರತಕ್ಕೆ ಹಿಂತಿರುಗುವ ಬಗ್ಗೆ ಬಾದ್ಯತೆಯಿಲ್ಲವೆಂಬ ಪ್ರಮಾಣ ಪತ್ರ | ಠಾಣಾಧಿಕಾರಿ | 7 ದಿನಗಳು | ಪೊಲೀಸ್ ನಿರೀಕ್ಷಕರು/ ಉಪ ವಿಭಾಗ ಪೊಲೀಸ್ ಅಧಿಕಾರಿಗಳು | 3 ದಿನಗಳು | ಪೊಲೀಸ್ ಅಧೀಕ್ಷಕರು | 3 ದಿನಗಳು |
| | ಆ) ಟಿಬೆಟಿಯನ್ನರು ಭಾರತಕ್ಕೆ ಹಿಂತಿರುಗುವ ಬಗ್ಗೆ ನಿರಕ್ಷೇಪಣಾ ಪತ್ರ | ಠಾಣಾಧಿಕಾರಿ | 7 ದಿನಗಳು | ಪೊಲೀಸ್ ನಿರೀಕ್ಷಕರು/ಉಪ ವಿಭಾಗ ಪೊಲೀಸ್ ಅಧಿಕಾರಿಗಳು | 3 ದಿನಗಳು | ಪೊಲೀಸ್ ಅಧೀಕ್ಷಕರು | 3 ದಿನಗಳು |
| 14. | ದೈಹಿಕ ಅಪರಾಧಗಳಿಗೆ ಸಂಬಂಧಿತ ವಿಷಯಗಳ<br>1. ವಂಚಿತರು/ ಫಿರ್ಯಾದುದಾರ/ ಸಾಕ್ಷಿ ಬೆಂಬಲಿತ ಸೇವೆಗಳಿಗೆ<br>2. ನಿರ್ಧಿಷ್ಟವಾಗಿ ಮಹಿಳೆಯರಿಗೆ ಸಂಬಂಧಿತ ವಿಷಯಗಳಲ್ಲಿ ವಂಚಿತರು/ ಫಿರ್ಯಾದುದಾರರ ಸೇವೆಗಳಿಗೆ ವೈದ್ಯಕೀಯ ಸಹಾಯ/ ಮನೋವೈಜ್ಞಾನಿಕ/ ಸಾಮಾಜಿಕ ಬೆಂಬಲ /ಸಾಂಸ್ಥಿಕ ಸಹಾಯ/ ಭದ್ರತೆಯ ಬೆಂಬಲ | ಠಾಣಾಧಿಕಾರಿ | 12 ಗಂಟೆಗಳ ಒಳಗೆ | ವೃತ್ತ ಪೊಲೀಸ್ ನಿರೀಕ್ಷಕರು/ಉಪ ವಿಭಾಗ ಪೊಲೀಸ್ ಅಧಿಕಾರಿಗಳು | 3 ದಿನಗಳು | ಪೊಲೀಸ್ ಅಧೀಕ್ಷಕರು | 3 ದಿನಗಳು |
| 15. | ಬೆಂಕಿ ಆಕಸ್ಮಿಕದ ತುರ್ತು ಕರೆಗಳಿಗೆ ಪ್ರತಿಕ್ರಿಯೆ | ಅಗ್ನಿಶಾಮಕ ಠಾಣಾಧಿಕಾರಿ | ಒಂದು ಗಂಟೆ (ಪ್ರಯಾಣ ಅವಧಿ ಹೊರತು ಪಡಿಸಿ) | ಜಿಲ್ಲಾ ಅಗ್ನಿಶಾಮಕ ಠಾಣಾಧಿಕಾರಿ | ಒಂದು ಗಂಟೆ (ಪ್ರಯಾಣದ ಅವಧಿ ಹೊರತು ಪಡಿಸಿ) | ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ | 48 ಗಂಟೆ (ಪ್ರಯಾಣದ ಅವಧಿ ಹೊರತು ಪಡಿಸಿ) |
| 16 | ಅಪಘಾತ, ನೈಸರ್ಗಿಕ ವಿಪತ್ತು, ರಕ್ಷಣಾ ಕಾರ್ಯ ಮತ್ತು ವಿಪತ್ತು ನಿರ್ವಹಣೆಯ ತುರ್ತು ಕರೆಗಳು | ಅಗ್ನಿಶಾಮಕ ಠಾಣಾಧಿಕಾರಿ | ಒಂದು ಗಂಟೆ (ಪ್ರಯಾಣದ ಅವಧಿ ಹೊರತು ಪಡಿಸಿ) | ಜಿಲ್ಲಾ ಅಗ್ನಿಶಾಮಕ ಠಾಣಾಧಿಕಾರಿ | 24 ಗಂಟೆ (ಪ್ರಯಾಣದ ಅವಧಿ ಹೊರತು ಪಡಿಸಿ) | ಪೊಲೀಸ್ ಅಧೀಕ್ಷಕರು | 48 ಗಂಟೆ (ಪ್ರಯಾಣದ ಅವಧಿ ಹೊರತು ಪಡಿಸಿ) |
| 17 | ವೀಸಾ ವಿಸ್ತರಣೆ–ಪೊಲೀಸ್ ಪರಿಶೋಧನೆ | ಠಾಣಾಧಿಕಾರಿ | 7 ದಿನಗಳು | ಪೊಲೀಸ್ ನಿರೀಕ್ಷಕರು/ಉಪ ವಿಭಾಗ ಪೊಲೀಸ್ ಅಧಿಕಾರಿಗಳು | 3 ದಿನಗಳು | ಪೊಲೀಸ್ ಅಧೀಕ್ಷಕರು | 3 ದಿನಗಳು |

| ಕ್ರ. ಸಂ | ಸೇವಾ ವಿವರ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತು ಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 18 | ವಿದೇಶಿಯರಿಗೆ ಪೊಲೀಸ್ ಪರವಾನಗಿ ಪತ್ರ | ಠಾಣಾಧಿಕಾರಿ | 7 ದಿನಗಳು | ಪೊಲೀಸ್ ನಿರೀಕ್ಷಕರು/ಉಪ ವಿಭಾಗ ಪೊಲೀಸ್ ಅಧಿಕಾರಿಗಳು | 3 ದಿನಗಳು | ಪೊಲೀಸ್ ಅಧೀಕ್ಷಕರು | 3 ದಿನಗಳು |
| 19 | ನಿರಾಪೇಕ್ಷಣಾ ಪತ್ರ ಬಹುಮಹಡಿ ಕಟ್ಟಡಗಳಿಗೆ ಅಗ್ನಿಶಾಮಕ–ಸೇವೆ | ಪ್ರಾದೇಶಿಕ ಅಗ್ನಿಶಾಮಕ ಠಾಣಾಧಿಕಾರಿ | 10 ದಿನಗಳು | ಮುಖ್ಯ ಅಗ್ನಿಶಾಮಕ ಠಾಣಾಧಿಕಾರಿ | 10 ದಿನಗಳು | ಉಪ ನಿರ್ದೇಶಕರು, ಅಗ್ನಿ ಶಾಮಕ ಇಲಾಖೆ | 5 ದಿನಗಳು |

**III. ಶೀರ್ಷಿಕೆ 8 –"ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ" ಯಲ್ಲಿನ**

(ಅ) ಕ್ರಮ ಸಂಖ್ಯೆ 1 ರಿಂದ 10 ರವರೆಗಿನ ಅಂಕಣ 3 ರಲ್ಲಿನ ನಮೂದು "ಪಂಚಾಯತ್ ಅಭಿವೃದ್ಧಿ ಅಧಿಕಾರಿ" ಬದಲಿಗೆ "ಪಂಚಾಯತ್ ಅಭಿವೃದ್ಧಿ ಅಧಿಕಾರಿ / ಗ್ರಾಮ ಪಂಚಾಯಿತಿ ಕಾರ್ಯದರ್ಶಿ" ಎಂದು ತಿದ್ದಪಡಿ ಮಾಡಿ ಓದಿಕೊಳ್ಳತಕ್ಕದ್ದು.

(ಆ) ಕ್ರಮ ಸಂಖ್ಯೆ 6ರಲ್ಲಿನ ಅಂಕಣ (2) ರಲ್ಲಿನ ನಮೂದು "ಬೀದಿ ದೀಪಗಳ ನಿರ್ವಹಣೆ" ಬದಲಾಗಿ "ಬೀದಿ ದೀಪಗಳ ನಿರ್ವಹಣೆ–ಸಣ್ಣ ಪ್ರಮಾಣದ ರಿಪೇರಿಗಳು" ಎಂದು ಓದಿಕೊಳ್ಳತಕ್ಕದ್ದು.

IV. ಕ್ರಮಸಂಖ್ಯೆ "11–ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ" ಯಲ್ಲಿನ ಕ್ರಮ ಸಂಖ್ಯೆ 4 ಮತ್ತು ಕ್ರಮ ಸಂಖ್ಯೆ 5 ರಲ್ಲಿನ ಅಂಕಣ (3) ರಲ್ಲಿನ ನಮೂದು "ಜಿಲ್ಲೆಯ ಅಶಕ್ತರ ಕಲ್ಯಾಣ ಅಧಿಕಾರಿ" ಎಂಬುದಕ್ಕೆ ಬದಲಾಗಿ ನಮೂದು "ಜಿಲ್ಲೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು" ಎಂಬುದಾಗಿ ಓದಿಕೊಳ್ಳತಕ್ಕದ್ದು.

V. ಶೀರ್ಷಿಕೆ 3. ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಕ್ರಮ ಸಂಖ್ಯೆ 1 ರಿಂದ 4 ರ ಬದಲಾಗಿ ಕೆಳಗಿನಂತೆ ಓದಿಕೊಳ್ಳತಕ್ಕದ್ದು:

| ಕ್ರಮ ಸಂ | ಸೇವಾ ವಿವರ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತು ಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯ ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಪಡಿತರ ಚೀಟಿ:– ಬೇರೆ ರಾಜ್ಯ ಜಿಲ್ಲೆ ತಾಲ್ಲೂಕಿಗೆ ಪಡಿತರ ಚೀಟಿ ವರ್ಗಾವಣೆ.<br>ಸದಸ್ಯರ ಹೆಸರನ್ನು ತೆಗೆಯುವುದು.<br>ದ್ವಿಪ್ರತಿ ಪಡಿತರ ಚೀಟಿ.<br>ಸ್ಥಳೀಯ ಪ್ರದೇಶ/ ತಾಲ್ಲೂಕಿನಲ್ಲಿ ವಿಳಾಸ ಬದಲಾವಣೆ.<br>ಸದಸ್ಯರ ಹೆಸರು ಸೇರಿಸುವುದು.<br>ಆಧ್ಯರ್ಪಣ (Surrender) ಪತ್ರದಂತೆ ಹೊಸ ಪಡಿತರ ಚೀಟಿ | ಸಂಬಂಧಪಟ್ಟ ಆಹಾರ ಪರಿವೀಕ್ಷಕರು | 7 ಕೆಲಸದ ದಿನಗಳು | ಗ್ರಾಮೀಣ/ ನಗರ ಪ್ರದೇಶಗಳಲ್ಲಿ ತಹಶೀಲ್ದಾರರ ು/ಐಆರ್‌ಎ ನಲ್ಲಿ ಸಹಾಯಕ ನಿರ್ದೇಶಕರು, ಬೆಂಗಳೂರು<br>ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಉಪ ನಿರ್ದೇಶಕರು | 15 ಕೆಲಸದ ದಿನಗಳು | ಜಿಲ್ಲೆಗಳಲ್ಲಿ ಮತ್ತು ಐಆರ್‌ಎ ನಲ್ಲಿ ಉಪ ನಿರ್ದೇಶಕರು, ಬೆಂಗಳೂರು<br>ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಅಪರ ನಿರ್ದೇಶಕರು | 15 ಕೆಲಸದ ದಿನಗಳು |

| ಕ್ರಮ ಸಂ | ಸೇವಾ ವಿವರ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತು ಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯ ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 2 | ಆಹಾರ ಧಾನ್ಯಗಳು, ಬೇಳೆಗಳು, ಖಾದ್ಯತೈಲ ಮತ್ತು ಸೀಮೆಎಣ್ಣೆಗಳಲ್ಲಿ ಸಗಟು ವ್ಯಾಪಾರಿಗಳಿಗೆ ಕರ್ನಾಟಕ ಅವಶ್ಯಕ ಸರಕುಗಳಿಗೆ ಲೈಸೆನ್ಸ್ ನೀಡುವ ಆದೇಶ 1986ರ ಅಡಿಯಲ್ಲಿ :– 1) ಲೈಸೆನ್ಸ್ ನೀಡುವುದು. 2) ದ್ವಿಪ್ರತಿ ಲೈಸೆನ್ಸ್ ನೀಡುವುದು. 3) ಆಧ್ಯರ್ಪಣೆ ಮಾಡುವುದು. 4) ನವೀಕರಣ ಮಾಡುವುದು. | ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರಿನ ಅನೌಪಚಾರಿಕ ಪಡಿತರ ವಲಯಗಳಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಅಪರ/ ಜಂಟಿ ನಿರ್ದೇಶಕರು | 30 ಕೆಲಸದ ದಿನಗಳು | ಆಯುಕ್ತರು, ಆಹಾರ ಮತ್ತು ನಾಗರಿಕ ಸರಬರಾಜು | 45 ಕೆಲಸದ ದಿನಗಳು | ಸರ್ಕಾರ | 45 ಕೆಲಸದ ದಿನಗಳು |
| 3 | ಆಹಾರ ಧಾನ್ಯಗಳು, ಬೇಳೆಗಳು, ಖಾದ್ಯತೈಲ ಮತ್ತು ಸೀಮೆಎಣ್ಣೆಗಳಲ್ಲಿ ಚಿಲ್ಲರೆ ವ್ಯಾಪಾರಿಗಳಿಗೆ ಕರ್ನಾಟಕ ಅವಶ್ಯಕ ಸರಕುಗಳ ಅಧಿನಿಯಮ 1986ರ ಅಡಿಯಲ್ಲಿ:– 1) ಲೈಸೆನ್ಸ್ ನೀಡುವುದು. 2) ದ್ವಿಪ್ರತಿ ನೀಡುವುದು. 3) ಆಧ್ಯರ್ಪಣೆ ಮಾಡುವುದು. 4) ನವೀಕರಣ ಮಾಡುವುದು. | ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶದ ಉಪ ನಿರ್ದೇಶಕರು, ಅನೌಪಚಾರಿಕ ಪಡಿತರ ವಲಯಗಳಲ್ಲಿ ಸಹಾಯಕ ನಿರ್ದೇಶಕರು ಮತ್ತು ನಗರ/ ಗ್ರಾಮೀಣ ಪ್ರದೇಶಗಳಲ್ಲಿ ತಹಶೀಲ್ದಾರರು | 35 ಕೆಲಸದ ದಿನಗಳು | ಬೆಂಗಳೂರಿನ ಅನೌಪಚಾರಿಕ ಪಡಿತರ ವಲಯಗಳಲ್ಲಿ ಅಪರ ನಿರ್ದೇಶಕರು ಮತ್ತು ನಗರ/ ಗ್ರಾಮೀಣ ಪ್ರದೇಶಗಳಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಉಪ ನಿರ್ದೇಶಕರು. | 45 ಕೆಲಸದ ದಿನಗಳು | ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಆಯುಕ್ತರು/ ಜಿಲ್ಲೆಯ ಜಿಲ್ಲಾಧಿಕಾರಿಗಳು. | 45 ಕೆಲಸದ ದಿನಗಳು |
| 4 | ಕರ್ನಾಟಕ ಅವಶ್ಯಕ ಸರಕುಗಳ (ಸಾರ್ವಜನಿಕ ವಿತರಣಾ ವ್ಯವಸ್ಥೆ) ನಿಯಂತ್ರಣ ಆದೇಶ 1992 ರ ಅಡಿಯಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ನಡೆಸುವುದಕ್ಕೆ 1) ಪ್ರಾಧಿಕಾರ ಪತ್ರ (Authorization) ನೀಡುವುದು. | ಜಿಲ್ಲೆಯ ಜಿಲ್ಲಾಧಿಕಾರಿಗಳು ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಅಪರ ನಿರ್ದೇಶಕರು | 30 ಕೆಲಸದ ದಿನಗಳು | ಆಯುಕ್ತರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ | 3 ತಿಂಗಳು | ಸರ್ಕಾರ | 6 ತಿಂಗಳು |

| ಕ್ರಮ ಸಂ | ಸೇವಾ ವಿವರ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಗೆ ಗೊತ್ತು ಮಾಡಿದ ಕಾಲ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯ ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | 2) ಪ್ರಾಧಿಕಾರ ದ್ವಿಪ್ರತಿ ನೀಡುವುದು.<br>3) ಆಧ್ಯರ್ಪಣೆ ಮಾಡುವುದು.<br>4) ನವೀಕರಣ ಮಾಡುವುದು. | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು–ಕಾರ್ಯಾಧ್ಯಯನ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಮೇ ೯, ೨೦೧೨ (ವೈಶಾಖ ೧೯, ಶಕ ವರ್ಷ ೧೯೩೪) | ನಂ. ೩೩೮ |
|---|---|---|

**EDUCATION SECRETARIAT**

**NOTIFICATION**

**No. ED 27 MAHITI 2012, Bangalore, dated: 8th May, 2012**

1. The Right of Children to Free and Compulsory Education Act 2009, as upheld by the Hon'ble Supreme Court prescribes that at least 25% of the strength of class I in unaided non minority institution be filled with children belonging to disadvantaged groups and weaker sections under section 12(1)(c) of the Act. It also provides for reimbursement of per child expenditure under section 12(2) of the Act. The Government of Karnataka have framed Rules vide Notification No. ED 77 YoYoKa 2010, dated 28.04.2012.

2. The Government is pleased to notify that the upper limit of the per student expenditure to be reimbursed to the unaided institution towards children admitted to Std-I shall be Rs. 11,848/- (Rupees Eleven thousand eight hundred forty eight only) per annum per student.

3. Further, it is also notified that the upper limit of the per student expenditure to be reimbursed to those unaided educational institutions which impart pre school education towards the children admitted to pre school class shall be Rs. 5,924/- (Rupees Five thousand nine hundred and twenty four only) per annum per student.

By Order and in the name of Governor of Karnataka,

**I.F. Magi**
Special Officer and Ex-Officio
Under Secretary to Government
Education Department (Planning)

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಮೇ ೯, ೨೦೧೨ (ವೈಶಾಖ ೧೯, ಶಕ ವರ್ಷ ೧೯೩೪) | ನಂ. ೩೩೯ |
|---|---|---|

**EDUCATION SECRETARIAT**

**NOTIFICATION**

**No. ED 27 MAHITI 2012, Bangalore, Dated: 8th May, 2012**

In exercise of the powers conferred by Karnataka Right of Children to Free and Compulsory Education Rules, 2012 notified vide No. ED 77 YoYoKa 2010, dated: 28.04.2012. The Government of Karnataka hereby makes following notification.

1. In the above said Rules under Part-I, Rule 2(e) and 2(f) with regard to 'Child belonging to disadvantaged group' and 'Child belonging to weaker section' it was mentioned that separate notification would be issued specifying the castes, categories and annual income limit of parents and guardians. Where as the Government is pleased to notify that the child belonging to disadvantaged group shall include child belonging to

    1. Scheduled Caste
    2. Scheduled Tribe
    3. Category I
    4. Category II A
    5. Category II B
    6. Category III A
    7. Category III B
    8. Orphan
    9. Migrant and street child
    10. Child with special needs
    11. HIV affected/infected child

Various castes/tribes constituting categories mentioned in Sl.No. 1 to Sl.No. 7, shall be as prescribed by Social Welfare Department from time to time.

2. Further the Government notifies that the 'child belonging to weaker sections' means, child belonging to all other castes and communities residing in Karnataka excluding the above categories whose parent's or guardian's annual income is less than the one prescribed by social welfare department from time to time to determine the creamy layer of socially & educationally Backward Class. The said limit currently is Rs. 3.50 lakhs (Rupees Three lakhs fifty thousand).

3. The unaided school shall earmark 25% of their sanctioned capacity for the purpose of admission as per the Rules. Out of the earmarked 25% of seats 7.5% of seats shall be provided to children belonging to Scheduled Caste and 1.5% of seats to children belonging to Scheduled Tribe. The balance of 16% seats shall be provided to other categories of children belonging to disadvantaged group and children belonging to weaker sections living in the neighbourhood. If sufficient number of applications from children belonging to SC have not been received then those seats shall be filled from among children belonging to ST and vice versa. If the SC & ST quota remains unfilled then it will be added to remaining categories of 2(e) & 2(f) of the Rules. In case, the seats earmarked for such other categories of children remain unfilled, those seats shall be filled from among children from Scheduled Caste and Scheduled Tribe.

4. After exhausting all the applications of children residing in the neighbourhood, application of children from outside the neighbourhood shall be considered.

5. Procedure prescribed by the Social Welfare Department shall be adopted for the identification of children belonging to categories 1 – 7 specified in para 1.

6. For identification of an orphan child, certificate of competent authority of Women and Child Development Department shall be relied upon.

7. For identification of migrant and street child, certificate of competent authority of Education Department or Women and Child Development Department or Labor Department shall be relied upon.

8. For identification of children with special needs and HIV affected / infected child, certificate of competent authority of Health Department shall be relied upon.

9. For identification of child belonging to weaker section, parents or guardian, certificate of competent authority of Revenue Department shall be relied upon.

By Order and in the name of Governor of Karnataka,

**I.F. Magi**
Special Officer and Ex-Officio
Under Secretary to Government
Education Department (Planning)


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಮೇ ೯, ೨೦೧೨ (ವೈಶಾಖ ೧೯, ಶಕ ವರ್ಷ ೧೯೩೪) | ನಂ. ೩೪೦ |
|---|---|---|


**HOME SECRETARIAT**

## NOTIFICATION

**No. HD 122 PPE 2012, Bangalore, Dated: 09.05.2012**

Whereas the draft of the following rules further to amend the Karnataka Prosecutions and Government Litigation (Recruitment) Rules, 2012, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (`2) of section 3 of the said Act for the information of persons likely to be effected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion, which may be received by the State Government from any person which respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Home Department, Karnataka Government Secretariat, Vidhana Soudha, Bangalore – 560 001.

**DRAFT RULES**

**1. Title and commencement:-** (1) These rules may be called the Karnataka Prosecutions and Government Litigations (Recruitment)(Amendment) Rules, 2012

(2) They shall come into force on the date of their publication in the Official Gazette.

**2. Amendment of Schedule:-** In the Karnataka Prosecutions and Government Litigations (Recruitment) Rules 2012, in the Schedule, in the entries relating to the category of the posts of "Public Prosecutors / Law Officer (Senior)" at serial No. 3 in the column No.(8), the following shall be inserted at the end, namely:-

"Provided that if a person who has put in a service of not less than five years is not available for promotion, a person who has put in a service of not less than three years may be considered for promotion."

By Order and in the name of the Governor of Karnataka.

**H.K.Ningappa**
Under Secretary to Government,
Home Department, (Police Services – 'B')

# ವಿಶೇಷ ಪತ್ರಿಕೆ



| ಭಾಗ – **IV-A** | ಬೆಂಗಳೂರು, ಸೋಮವಾರ, ಮೇ ೧೪, ೨೦೧೨ (ವೈಶಾಖ ೨೪, ಶಕ ವರ್ಷ ೧೯೩೪) | ನಂ. ೩೪೫ |
|---|---|---|



**PARLIAMENTARY AFFAIRS AND LEGISLATION SECRETARIAT**

**NOTIFICATION**

**No. DPAL 06 SAMVYAVI 2012, Bangalore, Dated : 14.5.2012**

The following Order made by the Governor is hereby published for general information:-

**"ORDER - I**

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Council.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

**PARLIAMENTARY AFFAIRS AND LEGISLATION SECRETARIAT**

**NOTIFICATION**

**No. DPAL 06 SAMVYAVI 2012, Bangalore, Dated : 14.5.2012**

The following Order made by the Governor is hereby published for general information:-

**"ORDER - II**

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Assembly.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ - **IV-A** | ಬೆಂಗಳೂರು, ಸೋಮವಾರ, ಮೇ ೧೪, ೨೦೧೨ (ವೈಶಾಖ ೨೪, ಶಕ ವರ್ಷ ೧೯೩೪) | ನಂ. ೩೪೬ |
|---|---|---|

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:1261:ಸರಾ:2012, ಬೆಂಗಳೂರು, ದಿನಾಂಕ: 14ನೇ ಮೇ, 2012**

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯಸರಾದ ಶ್ರೀ ವೈ.ಎ. ನಾರಾಯಣಸ್ವಾಮಿ ಅವರು ವಿಧಾನ ಪರಿಷತ್ತಿನ ಸದಸ್ಯತ್ವ ಸ್ಥಾನಕ್ಕೆ ದಿನಾಂಕ: 14.05.2012 ರಂದು ರಾಜೀನಾಮೆಯನ್ನು ಸಲ್ಲಿಸಿದ್ದು, ಸದರಿ ರಾಜೀನಾಮೆಯನ್ನು ಮಾನ್ಯ ಸಭಾಪತಿಯವರು ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯವಿಧಾನ ಹಾಗೂ ನಡವಳಿಕೆಯ ನಿಯಮ 185(2)ರ ಮೇರೆಗೆ ಅಂಗೀಕರಿಸಿರುತ್ತಾರೆ.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL SECRETARIAT

**NOTIFICATION**

**No. KLC/Legn/1261/MR/2012, Bangalore, Dated: 14th May, 2012**

Sri Y.A. Narayanaswamy, Member of Karnataka Legislative Council tendered resignation to his Membership of the Legislative Council on 14th May, 2012. The Hon'ble Chairman, Legislative Council has accepted the resignation as per rule 185(2) of the Rules of Procedure and Conduct of Business in Karnataka Legislative Council.

**V. SHREESH**
Secretary
Karnataka Legislative Council

# ವಿಶೇಷ ಪತ್ರಿಕೆ

| ಭಾಗ - **V** | ಬೆಂಗಳೂರು, ಸೋಮವಾರ, ಮೇ ೧೪, ೨೦೧೨ (ವೈಶಾಖ ೨೪, ಶಕ ವರ್ಷ ೧೯೩೪) | ನಂ. ೩೪೭ |
|---|---|---|

## ಸಾರ್ವಜನಿಕ ಶಿಕ್ಷಣ ಇಲಾಖೆ

ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲಬರ್ಗಾ ವಿಭಾಗ ಆಯುಕ್ತರ ಕಛೇರಿ, ಗುಲಬರ್ಗಾ ಇವರ ಕಾರ್ಯಾಲಯ

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಇ1(ಎ)/ಆಡಳಿತ/ಪ್ರೌಶಾಶಿ/ಆಯ್ಕೆ/01/2012-13, ಬೆಂಗಳೂರು, ದಿನಾಂಕ: 11ನೇ ಮೇ 2012**

2012-13ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲಬರ್ಗಾ ವಿಭಾಗ, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಸರ್ಕಾರಿ ಪ್ರೌಢ ಶಾಲೆಗಳು, ಆದರ್ಶ ವಿದ್ಯಾಲಯಗಳು ಮತ್ತು ಆರ್.ಎಂ.ಎಸ್.ಎ. ಅಡಿಯಲ್ಲಿ ಉನ್ನತೀಕರಿಸಲಾದ ಸರ್ಕಾರ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್-2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್-1 ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಶಿಕ್ಷಕರನ್ನು ಆಯ್ಕೆ ಮಾಡುವ ಸಂಬಂಧದಲ್ಲಿ ಸಂಖ್ಯೆ: ಇ1(ಎ)/ಆಡಳಿತ/ಪ್ರೌಶಾಶಿ/ಆಯ್ಕೆ/01/2012-13 ದಿನಾಂಕ: 2-04-2012 (ಕರ್ನಾಟಕ ರಾಜ್ಯ ವಿಶೇಷ ರಾಜ್ಯಪತ್ರ ಭಾಗ-V, ನಂ. (262) ರ ರೀತ್ಯಾ ಹೊರಡಿಸಲಾಗಿದ್ದುದು ಸರಿಯಷ್ಟೆ.

ಸದರಿ ಅಧಿಸೂಚನೆಯ ಪುಟ ಸಂಖ್ಯೆ: (10) ರಲ್ಲಿ ಕಂಡಿಕೆ -13 (iv) ರ ಅಡಿಯಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವೇಳಾ ಪಟ್ಟಿಯನ್ನು ನೀಡಲಾಗಿದ್ದು ಸದರಿ ವೇಳಾ ಪಟ್ಟಿಯ ಕೊನೆಯಲ್ಲಿ ಸಂಸ್ಕೃತ / ಉರ್ದು / ತಮಿಳು ಭಾಷೆಯ ಪತ್ರಿಕೆ ಪರೀಕ್ಷೆ ದಿನಾಂಕ: 26-06-2012 ರಂದು ಮಧ್ಯಾಹ್ನ 2-00 ಗಂಟೆಯಿಂದ 4-00 ಗಂಟೆಯವರೆಗೆ ನಿಗದಿಪಡಿಸಲಾಗಿದ್ದು, ಮರಾಠಿ ಭಾಷೆಯ ವಿಷಯವನ್ನು ನಮೂದಿಸಿರುವುದಿಲ್ಲ. ಅದರಂತೆ ದಿನಾಂಕ: 26-06-2012 ರಂದು ಮಧ್ಯಾಹ್ನ 2-00 ಗಂಟೆಯಿಂದ 4-00 ಗಂಟೆಯವರೆಗೆ ಈ ವಿಭಾಗದ (06) ಜಿಲ್ಲೆಗಳಲ್ಲಿ ಮರಾಠಿ ಭಾಷಾ ಶಿಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಿಗೆ ಮರಾಠಿ ಭಾಷೆಯ ಪರೀಕ್ಷೆಯನ್ನು ನಡೆಸಲಾಗುವುದು

ಸದರಿ ಅಧಿಸೂಚನೆಯ ಪುಟ ಸಂಖ್ಯೆ: 53 ರಲ್ಲಿ ರಾಯಚೂರು ಜಿಲ್ಲೆಯ ಭೌತ ವಿಜ್ಞಾನ ಉರ್ದು ಮಾಧ್ಯಮದ (01) ಹುದ್ದೆಯ ಮೀಸಲಾತಿ ವರ್ಗೀಕರಣವನ್ನು ಪ್ರಕಟಿಸಲಾಗಿದ್ದು, ಸದರಿ ಹುದ್ದೆ **ಪರಿಶಿಷ್ಟ ಜಾತಿ–ಗ್ರಾಮೀಣ** ಅಭ್ಯರ್ಥಿಗೆ ಮೀಸಲಿಡಲಾಗಿದ್ದು, ಸದರಿ ವರ್ಗೀಕರಣದ ಅಂಕಣ (07) ರಲ್ಲಿ ಸಾಮಾನ್ಯ ಅಭ್ಯರ್ಥಿಯ ಒಟ್ಟು ಕಾಲಂದಲ್ಲಿ (01) ಎಂದು ತಪ್ಪಾಗಿ ಮುದ್ರಣವಾಗಿದ್ದು, ಅದನ್ನು ಶೂನ್ಯವೆಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ, ಪರೀಕ್ಷಾ ವೇಳಾ ಪಟ್ಟಿ ಹಾಗೂ ಇನ್ನಿತರ ಮಾಹಿತಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಸಿ.ವಿ. ಹಿರೇಮಠ**
ಆಯ್ಕೆ ಪ್ರಾಧಿಕಾರಿಗಳು ಹಾಗೂ ವಿಭಾಗೀಯ ಕಾರ್ಯದರ್ಶಿಗಳು,
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ
ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ,
ಗುಲಬರ್ಗಾ ವಿಭಾಗ ಆಯುಕ್ತರ ಕಛೇರಿ, ಗುಲಬರ್ಗಾ

# ವಿಶೇಷ ಪತ್ರಿಕೆ


| ಭಾಗ – V | ಬೆಂಗಳೂರು, ಬುಧವಾರ, ಮೇ ೧೬, ೨೦೧೨ (ವೈಶಾಖ ೨೬, ಶಕ ವರ್ಷ ೧೯೩೪) | ನಂ. ೩೪೯ |
|---|---|---|


## ಒಳಾಡಳಿತ ಸಚಿವಾಲಯ

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಡಿಪಿಎನ್/ಸಸಅ/ಆರ್.ಸಿ/01/2011–2012, ಬೆಂಗಳೂರು, ದಿನಾಂಕ: 16/05/2012**

**ವಿಷಯ:–** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:–**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸೆಹಿಮ 95, ದಿನಾಂಕ 20.06.1995
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 34 ಎಸ್ಆರ್ಆರ್ 2002, ದಿನಾಂಕ 02.03.02.
3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 107 ಸೇನೆನಿ 2005 ದಿನಾಂಕ:05.09.2005.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53 ಸೇನೆನಿ 2007, ದಿನಾಂಕ 04.01.2008
5) ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 166 ಪಿಪಿಇ 2008 ದಿ:30.01.2012.
6) ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 47 ಎಸ್ಆರ್ಆರ್ 2012 ದಿನಾಂಕ: 06.03.2012.

**1. ಅರ್ಜಿ ಆಹ್ವಾನ:–**

ಅರ್ಹತೆ ಇರುವ ಅಭ್ಯರ್ಥಿಗಳಿಂದ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ 197 ಹುದ್ದೆಗಳ ಆಯ್ಕೆಗಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ಸಂಖ್ಯೆ ಬದಲಾವಣೆಗೆ ಒಳಪಟ್ಟಿದೆ.

**2. ಅರ್ಜಿಗಳನ್ನು ಸ್ವೀಕರಿಸುವ ಸ್ಥಳ:–**

ಅಭ್ಯರ್ಥಿಗಳು ಭರ್ತಿ ಮಾಡಿ ಸಹಿ ಮಾಡಿದ ಅರ್ಜಿಗಳನ್ನು ಎಲ್ಲಾ ದಸ್ತಾವೇಜುಗಳ : ಅಂಕಪಟ್ಟಿಗಳ ಮತ್ತು ಇತರೆ ನಕಲುಗಳೊಂದಿಗೆ ಕಾರ್ಯದರ್ಶಿ, ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಆಯ್ಕೆ ಸಮಿತಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, 6ನೇ ಮಹಡಿ, ಕಾವೇರಿ ಭವನ, ಕೆ.ಹೆಚ್.ಬಿ ಕಾಂಪ್ಲೆಕ್ಸ್, ಕೆಂಪೇಗೌಡ ರಸ್ತೆ, ಬೆಂಗಳೂರು–560009, ಇವರಿಗೆ ಸಲ್ಲಿಸತಕ್ಕದ್ದು.

**3. ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ:–**

ಅರ್ಜಿಗಳನ್ನು ಸ್ವೀಕರಿಸಲು ಕೊನೆಯ **ದಿನಾಂಕ: 30–06–2012ರ** ಸಾಯಂಕಾಲ 5.30 ಘಂಟೆ ಆಗಿರುತ್ತದೆ. ನಂತರ ಬಂದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.

